# ಹೂದೋಟ

(ಕವನ ಸಂಗ್ರಹ)

ಲೇಖಕ:

ಎಸ್. ಶಂಕರನಾರಾಯಣ ಭಟ್ಟ,

ಹಯರ್ ಸೆಕೆಂಡರೀ ಸ್ಕೂಲು, ಹಾತೂರು, (ಕೊಡಗು)

ಬೆಲೆ 0-50

# ಮುನ್ನುಡಿ

ಕವಿಮಿತ್ರ ಶ್ರೀ ಎಸ್. ಶಂಕರನಾರಾಯಣ ಭಟ್ಟರು ತನ್ನ "ಹೂದೋಟ"ವೆಂಬ ಕವಿತಾ ಸಂಗ್ರಹಕ್ಕೆ ಮುನ್ನುಡಿಯನ್ನು ಬರೆಯಬೇಕೆಂದು ಕೇಳಿಕೊಂಡಾಗ ಅವರ ಉತ್ಸಾಹ, ಪ್ರತಿಭೆ, ಸರಳತನ ಇತ್ಯಾದಿಗಳಿಗೆ ಮಾರು ಹೋಗಿ ನಾನು ಒಪ್ಪಿಕೊಳ್ಳುವಂತಾಯಿತು. ಕರ್ಣಾಟಕ ಏಕೀಕರಣವಾದ ಬಳಿಕದ ಈ ನವಯುಗದಲ್ಲಿ ಎಲ್ಲ ಮಾರ್ಗಗಳಲ್ಲೂ ಹಲತರದ ಚಟುವಟಿಕೆ, ಅಭಿವೃದ್ಧಿಗಳು ತೋರಿಬರುತ್ತಿವೆಯಾದರೂ ಸಾಹಿತ್ಯ ಲೋಕದಲ್ಲಿ ಸಾಕಷ್ಟು ಪ್ರಗತಿಯಾದಂತೆ ತೋರುವುದಿಲ್ಲ. ಅಲ್ಲಲ್ಲಿ ಬಣ್ಣ ಬಣ್ಣದ ಹಗಲು ವೇಷಗಳಂತಹ ಕೇವಲ ಬೀದಿಹೋಕರ ಮನಸೆಳೆಯುವ ಹುಚ್ಚು ಹೊತ್ತಗೆಗಳು ಧಾರಾಳವಾಗಿ ಬೆಳೆದು ಬಂದಂತೆ ತೋರಿದರೂ, ಅಭ್ಯಾಸಪೂರ್ವಕವಾದ ಪ್ರತಿಭಾಫಲವಾಗಿರುವ ಭಾವೀ ಯುಗದಲ್ಲಿ ಹೆಸರುಳಿಯಬಲ್ಲ ಉತ್ತಮ ಕೃತಿಗಳು ಸಾಕಷ್ಟು ಬಂದಿಲ್ಲವೆಂದೇ ಹೇಳಬೇಕು. ಇದೀಗ ಕನ್ನಡ ಸಾಹಿತ್ಯದ —ಗದ್ಯ, ಪದ್ಯ, ನಾಟಕ, ವಿಮರ್ಶೆ ಮುಂತಾದ ಎಲ್ಲ ಭಾಗಗಳಲ್ಲೂ ಕಾಣ ಬರುತ್ತಿದೆ. ಇದಕ್ಕೆ ಕವಿಗಳ ಸೌಲಭ್ಯಾಕಾಂಕ್ಷೆ, ಸರಕಾರದ ಹಾಗೂ ಓದುಗರ ಅನಾದರ, ಪ್ರಕಾಶಕರ ಲಾಭದಾಶೆ— ಮುಂತಾದುವೆಲ್ಲ ಕಾರಣವಿರಬಹುದು. ಯೇನಕೇನ ಪ್ರಕಾರೇಣ ಪ್ರಸಿದ್ಧಿಗೆ ಬಂದಿದ್ದು ಲಾಭಮಾಡಿ ಕೊಡಬಲ್ಲ ಸಾಮಾನ್ಯ ಲೇಖಕನಿಗೆ ಸುಲಭವಾದ ಪ್ರಕಾಶನದ ಲಾಭ ದೊರಕಬಹುದಾದರೂ, ಈ ತನಕ ಬೆಳಕಿಗೆ ಬಾರದಿರುವ ಉತ್ತಮ ಪ್ರತಿಭಾಶಾಲಿಗೂ ಪ್ರೋತ್ಸಾಹ ದೊರಕುವುದು ಕಷ್ಟವಾಗುತ್ತದೆ. ಇದೀಗ ಕನ್ನಡ ಸಾಹಿತ್ಯ ಲೋಕದ ಇಂದಿನ ಬೇಸರ ತರುವ ವಾಸ್ತವ ಚಿತ್ರ. ಮುಂದಕ್ಕಾದರೂ ಅದು ಸುಂದರವಾಗಲೆಂದು ಹಾರೈಸಬೇಕಾಗಿದೆ.

ಇಂತಹ ಸಂದರ್ಭದಲ್ಲಿ ಉತ್ಸಾಹೀ ಕವಿ ಶ್ರೀ ಶಂಕರನಾರಾಯಣ ಭಟ್ಟರ ಪ್ರಯತ್ನ ತುಂಬಾ ಶ್ಲಾಘನೀಯವಾಗಿದೆ. ಇವರು ಕನ್ನಡ, ಹಿಂದೀ ಮುಂತಾದ ಹಲವು ಭಾಷೆಗಳಲ್ಲಿ ಉತ್ತಮ ಪಾಂಡಿತ್ಯವನ್ನು ಗಳಿಸಿ ಪ್ರೌಢ ಶಾಲೆಯೊಂದರಲ್ಲಿ ಭಾಷಾಧ್ಯಾಪಕರಾಗಿದ್ದಾರೆ. ಕವಿತೆ ಬೆಳಕಿಗೆ ಬಾರದೆ ಕವಿ ಮುಂದೆ ಬರುವುದೆಂತು? ದೀಪ ಬೆಳಗಿವರೆ ತಾನೆ ಪ್ರಕಾಶದ ಪರಮಾ

ನಂದ ಇತರರಿಗೆ ಒದಗುವುದು. ಹಾಗಾಗಿ ಸ್ವತಃ ಈ ಕವಿತಾ ಸಂಗ್ರಹ ವನ್ನು ಪ್ರಕಟಿಸುವ ಪ್ರಯತ್ನ ಕೈಕೊಂಡು ಕನ್ನಡ ನಾಡಿನ ಸಹೃದಯರಿಗೆ ತುಂಬಾ ಉಪಕಾರ ಮಾಡಿದ್ದಾರೆ.

ಇಪ್ಪತ್ತೆರಡು ಉತ್ತಮ ಕೃತಿಗಳನ್ನೊಳಗೊಂಡ ಈ ಸಂಚಯವು ಆದರಣೀಯವೂ ಶ್ಲಾಘನೀಯವೂ ಆಗಿದೆ. ಕವಿತೆಗಳನ್ನು ಓದುತ್ತ ಹೋಗುವಾಗ ಕವಿಯ ವಿಶಾಲವಾದ ಅಭ್ಯಾಸದ ಪ್ರಭಾವವು ತೋರಿ ಬರು ತ್ತದೆ. ಭಾಷೆಯು ಸರಳವಾಗಿದ್ದು ನಿರರ್ಗಳವಾಗಿ ಸಾಗುವಂತಿದೆ. ಓದಲಾರಂಭಿಸಿದರೆ ಮುಗಿಯುವ ವರೆಗೂ ಪುಟ ಮಗುಚುತ್ತ ಹೋದುದು ತಿಳಿಯದಂತಿದೆ. ಭಾವಾರ್ಥ ಚೇತೋಹಾರಿಯಾಗಿದ್ದು ಸಹೃದಯನನ್ನು ತನ್ಮಯಗೊಳಿಸುತ್ತದೆ.

"ತೊದಲುವೆ ನಾಂ ನೀನೇನಂ ತೊದಲಿಸೆ
ಹಾಡಿಸು ಇಂಪಿನ ಗೀತವನು"

—ಎಂಬುದಾಗಿ ಜಗದಾಧಾರಕನ ನಮಿಸಿ ಆರಂಭಿಸಿದ ಕವಿತೆ "ಶಾಂತ ಚಿತ್ತ ಕ್ಷೇತ್ರದಲ್ಲಿ ಭಾವ ಬೀಜ ಮೊಳೆತು" ಹೂ ಹಣ್ಣುಗಳನ್ನು ತಳೆದು ಜನಮನೋಹಾರಿಯಾಗಿ ಪರಿಣಮಿಸಿದೆ. "ಕನ್ನಾಡಂ", ಒಂದಾಗಿ ದುಡಿಯುವುದೆ ಬರಲಿ," "ಮುಂದಕೆ" —ಮುಂತಾದ ಕೆಲ ಕವಿತೆಗಳು ನಾಡು ನುಡಿ ಜನಗಳನ್ನು "ಮಾಡು ಒಳಿತನು ಕೂಡು ಹಿತವನು, ಸಾಗು ಮುಂದಕೆ ಮುಂದಕೆ" ಎಂದು ಹುರಿದುಂಬಿಸಲು ಸಾಕಷ್ಟು ಸಮರ್ಥ ವಾಗಿವೆ. 'ನಾ ಬರುವೆ', 'ಯುಗಾದಿ', 'ನಾಗರಿಕತೆ', 'ಅಗ್ನಿ ಕುಂಡ,' 'ಕೃತಿ-ಬೆಳಸು' —ಇವು ಉತ್ತಮ ಭಾವಗರ್ಭಿತವಾಗಿದ್ದು ಮನಸೆಳೆಯ ಬಲ್ಲವುಗಳಾಗಿವೆ. ಉಳಿದ ಕವಿತೆಗಳೂ ಸರಸವಾಗಿದ್ದು ಸರಾಗವಾಗಿ ಹಾಡಲನುಕೂಲವಾಗಿವೆ. ಅಂತೂ ಶ್ರೀ ಶಂಕರನಾರಾಯಣ ಭಟ್ಟರ ಪ್ರಯತ್ನ ಸಫಲವಾಗಿ ಕನ್ನಡ ಜನತೆಯ ಪ್ರೋತ್ಸಾಹ ಪಡೆಯುವಂತಾಗಲಿ. ಇನ್ನಷ್ಟು ಉತ್ತಮ ಕೃತಿಗಳು ಅವರ ಲೇಖನಿಯಿಂದ ಹರಿದು ಬರಲಿ. —ಎಂದು ಹಾರೈಸುತ್ತೇನೆ.

ಮಡಿಕೇರಿ
ತಾ. ೧೫—೧—'೫೯

ಪ್ರೊ. ಕೆ. ಆರ್. ಉಡುಪ.

# ಎರಡು ಮಾತು



'ಹೂದೋಟ' ಕವನ ಸಂಗ್ರಹವು ಸ್ವಲ್ಪ ಸಮಯಕ್ಕೆ ಮೊದಲೇ ಪ್ರಕಟವಾಗಬೇಕಿತ್ತು. ಆದರೆ ಆರ್ಥಿಕ ಅನಾನುಕೂಲತೆಯಿಂದಾಗಿ ಈ ತನಕ ಅಚ್ಚಾಗದೆ ಉಳಿಯಿತು.

'ಹೂದೋಟವು, ಹೊತ್ತಿಗೆಯ ರೂಪದಲ್ಲಿ ಓದುಗರ ಕೈ ಸೇರಿದ ನನ್ನ ಮೊತ್ತಮೊದಲನೆಯ ಕವನ ಸಂಗ್ರಹವಾಗಿದೆ. ನಾನು ವಿದ್ಯಾರ್ಥಿಯಾಗಿದ್ದಾಗ ನನ್ನ ಗುರುವರ್ಯರು ಪ್ರೋತ್ಸಾಹಿಸಿ ಲೇಖನ ಕವನಗಳ ರಚನೆಯ ಕಡೆ ನನ್ನ ಮನವನ್ನು ಹರಿಯಿಸಿದರು. ಆ ಮೇಲೆ ಉತ್ಸಾಹೀ ಸಾಹಿತ್ಯಪ್ರಿಯರಾದ ಗೆಳೆಯರ ಸತ್ಸಂಸರ್ಗದಿಂದ ಆ ನನ್ನ ಮನೋಭಾವ ಇನ್ನೂ ಮುಂದುವರಿಯಿತು. ಅವರೆಲ್ಲರಿಗೆ ನಾನು ಚಿರ ಕೃತಜ್ಞ. ಆಗ ಬರೆದವುಗಳಲ್ಲಿ ಒಂದೆರಡು ಕವನಗಳನ್ನು ಈ ಸಂಕಲನದಲ್ಲಿ ಸೇರಿಸಿದ್ದೇನೆ. ಹಿರಿಯರು, ಸಾಹಿತ್ಯ ಜಗತ್ತಿನಲ್ಲಿ ಇನ್ನೂ ಅಂಬೆಗಾಲಿಕ್ಕಿ ನಡೆವ ನನ್ನನ್ನು ನಡೆದೆಡಹಿದಾಗ ಕೈ ಹಿಡಿದೆತ್ತಿ ಆಧರಿಸಬೇಕಾಗಿದೆ.

ಈ ಚಿಕ್ಕ ಹೊತ್ತಿಗೆಯಲ್ಲಿರುವ ಹೆಚ್ಚಿನ ಕವಿತೆಗಳು 'ಚಿತ್ರಗುಪ್ತ,' 'ಮಲೆನಾಡು,' 'ಕೊಡಗು' 'ಸತ್ಯಾರ್ಥಿ' ಮೊದಲಾದ ಪತ್ರಿಕೆಗಳ ವಿಶೇಷ ಹಾಗೂ ಸಾಮಾನ್ಯ ಸಂಚಿಕೆಗಳಲ್ಲಿ ಒಮ್ಮೆ ಬೆಳಕನ್ನು ಕಂಡಿರುತ್ತವೆ. ಆ ಪತ್ರಿಕೆಗಳ ಸಂಪಾದಕರಿಗೆ ನಾನು ಋಣಿಯಾಗಿರುತ್ತೇನೆ. ಇನ್ನು ಕೆಲವು, ಬೇರೆಬೇರೆ ಸಾಹಿತ್ಯ ಸಂಘ ಸಂಸ್ಥೆಗಳು ಏರ್ಪಡಿಸಿದ ಕವನ ಸ್ಪರ್ಧೆಗಳಲ್ಲಿ ಬಹುಮಾನ ಪಡೆದವುಗಳಾಗಿವೆ. ಅವರೆಲ್ಲರ ಪ್ರೋತ್ಸಾಹಕ್ಕೆ ನಾನು ಕೃತಜ್ಞನೇ ಆಗಿದ್ದೇನೆ.

ಈ ಸಂಗ್ರಹದ ಕವಿತೆಗಳನ್ನು ಓದಿ ಸಲಹೆಗೊಟ್ಟು ಮುನ್ನುಡಿಯನ್ನು ಬರೆದು ಕೊಟ್ಟ ಮಡಿಕೇರಿ ಸರಕಾರೀ ಕಾಲೇಜಿನ ಕನ್ನಡ ಪ್ರೊಫೆಸರ್ ಶ್ರೀಮಾನ್ ಕೆ. ರಾಮಕೃಷ್ಣ ಉಡುಪ M.A.,B.T., ಅವರ ಉಪಕಾರಕ್ಕೆ ನಾನು ತುಂಬ ಆಭಾರಿಯಾಗಿದ್ದೇನೆ. ಅಲ್ಲದೆ ಈ ಕವನ ಸಂಗ್ರಹವನ್ನು ಅಚ್ಚು ಹಾಕಿಸುವ ವಿಷಯದಲ್ಲಿ ಸ್ವಲ್ಪ ಧನಸಹಾಯವನ್ನಿತ್ತು ಪ್ರೋತ್ಸಾ

ಹಿಸಿದ ಧರ್ಮಸ್ಥಳದ ಕೀ. ಶೇ. ಮಂಜಯ್ಯ ಹೆಗ್ಗಡೆಯವರನ್ನು ಗೌರವ ಪೂರ್ವಕನೆನೆಯುವವನಾಗಿದ್ದೇನೆ.

ಸಕಾಲದಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ ಮಂಗಳೂರಿನ 'ಸಿದ್ಧಾರ್ಥ ಪ್ರಿಂಟರ್ಸ್'ರವರಿಗೂ ನನ್ನ ವಂದನೆಗಳು.

ಇತಿ,

ಶಾರದಾ ನಿಲಯ,<br>ಹಾತೂರಂ<br>ತಾ. ೧-೨-'೫೯

ಎಸ್. ಶಂಕರನಾರಾಯಣ ಭಟ್ಟ.

ಅರ್ಪಣೆ

ನನ್ನ

ಗುರುಚರಣಾರವಿಂದಗಳಿಗೆ—

# ಅನುಕ್ರಮಣಿಕೆ







# ನುಡಿಸಲು, ನುಡಿಯುವೆ

೧

ಲೋಕನಿಯಾಮಕ ಜಗದಾಧಾರಕ
ಗಿರಿಜಾರಮಣನೆ ಹಾಡುವೆನು
ವಿಬುಧಸುಪೂಜಿತ, ನತಜನಮಾನಿತ
ನಿನ್ನಯ ಪಾದಕೆ ನಮಿಸುವೆನು

೨

ನನ್ನೀ ಹೃದಯದ ವೀಣೆಯ ನುಡಿಸುವೆ
ಪ್ರಾಣದ ತಂತಿಯನೊತ್ತುತಲಿ
ತನುವಿದು ನಿನ್ನದು, ಹರಣವು ನಿನ್ನದು
ನುಡಿಸಲು, ನುಡಿಯುವೆ ರಾಗದಲಿ.

೩

ಮಾಯಾಜಗವಿದು, ಮಾಯೆಯಲಿಹೆನು
ಮಾಯಾಪಾಶದಿ ಸಿಲುಕಿಹೆನು
ನಿನ್ನಯ ನಾಮವು ರಸನೆಯೊಳಿರಲು
ಬೇರೇನಂ ನಾಂ ಬಯಸುವೆನು?

೪

ಕರುಣಾಮೂರ್ತಿಯ ಕರುಣೆಯ ತೊಟ್ಟಿಲ
ಹಸುಳೆಯೆ ತಿಳಿಯೆನು ನಾ ನಿನ್ನು
ವಿಧವಿಧ ಸುಂದರವಸ್ತುವನೀಕ್ಷಿಪ
ಕಣ್ಣಂ ಕರುಣಿಸು ಎನಗಿನ್ನು.

೫

ತೊದಲುವೆ ನಾಂ ನೀನೇನಂ ತೊದಲಿಸೆ
ಹಾಡಿಸು ಇಂಪಿನ ಗೀತವನು.
ನಿನ್ನಯ ಒಲುಮೆಯ ಆಣತಿಯಿಂದಲಿ
ಕಾವ್ಯೋದ್ಯಾನವ ವಿರಚಿಪೆನು.

೬

ಅರಳಿಸು ನಾನಾಬಣ್ಣದ ಹೂಗಳ
ಜನಮನರಂಜಕವಾಗಿರಲಿ.
ಪ್ರಕೃತಿಯ ಮನೆಯಲಿ ಬೆಡಗನ್ನೀಯುವ
ಮಂಗಲಶೋಭೆಯದಾಗಿರಲಿ.



# ಹೂವ ತಳೆಯಿತು

ಶಾಂತಚಿತ್ತಕ್ಷೇತ್ರದಲ್ಲಿ
ಭಾವಬೀಜ ವೊಳೆಯಿತು.
ಬಾಹ್ಯಸೃಷ್ಟಿವಾರಿಯಿಂದ
ಬೆಳೆದು ಹೂವ ತಳೆಯಿತು.

# ನಾಬರುವೆ

೧

ನಾಬರುವೆ, ನಾಬರುವೆನೆಲ್ಲಿಗೋಡುತಲಿರುವೆ?
ನಾಬರುವೆ ಸೌಸವದ ಕ್ಷೇಮನಿಧಿಗೆ.
ಕತ್ತಲಿಂ ಬೆಳಕಿಂಗೆ; ಸಂಜೆಯಿಂ ಬೆಳಗಿಂಗೆ
ಓಡುತೋಡುತಲಿರುವೆ ನಿನ್ನ ನೆಲೆಗೆ

೨

ದುಃಖದಾ ಕಡಲಿಲ್ಲಿ, ಸೊಗವೀಡ ಗೂಡಲ್ಲಿ
ನಾಬರುವೆ ಸಂತಸದ ಸೊಗವೀಡಿಗೆ
ಸೊಗದ ಮರಬಳ್ಳಿಗಳು, ಸಂತಸದ ಹೂದಳಿರು
ಇಹುದೆಲ್ಲಿ ಕೊಂಡೊಯ್ಯು ನಾಡಿನೆಡೆಗೆ.

೩

ಮಿಥ್ಯದಳಿವಿಹುದೆಲ್ಲಿ? ಸಚ್ಚಸೊಗಸಿಹುದೆಲ್ಲಿ?
ಆ ನಿನ್ನ ತಾಣವನು ಎನಗೆ ತೋರು.
ಶಾಂತಿಮಾತೆಯ ಮಡಿಲ ಹಸುಗೂಸುತನವನ್ನು
ಒಲುಮೆಯಿಂದೆನ್ನಲ್ಲಿ ನೀನು ಬೀರು.

೪

ನಾನೆ ನೀನೆನುತ, ನನ್ನನ್ನು ನಿನ್ನವನೆನುತ
ಎತ್ತಿಕೋ ನಿಡುದೋಳ ನೀಡುತೆನಗೆ.
ಎನಗೆ ನೀನೇ ಶರಣ; ನಿನ್ನ ಕಾಂಬುದೆ ಹರಣ.
ತೋರಿಕೊಡು ಆ ನಿನ್ನ ವಿಮಲಚರಣ.

# ಸೂರ್ಯೋದಯ

೧

ಮಂಗಳಧಾರೆಯ ತುಂಗಸ್ರೋತವು
ಮೂಡಲ ಮನೆಯಲಿ ಹರಿಯುವುದೊ!
ನಿಶ್ಚಲಭಾವದ ಶಾಂತಿಯ ರೂಪವು
ಲೋಕಾಕಾಶದಿ ನಲಿಯುವುದೊ!

೨

ಸುಮಧುರ ಬಂಧುರ ಮಂಜುಳಗೇಯದ
ಭೃಂಗಾರಾಮವು ನೆಲೆಸಿಹುದೊ!
ಉಷೆಯಾಲಿಂಗಿತ-ಸುರಭಿಸಮೀರಣ-
ವೊಲೆಯುತ ತೂಗುವ ಬರುತಿಹುದೊ!

೩

ಪ್ರಿಯಮುಖ-ಚುಂಬಿತ-ಪುಷ್ಪೋದ್ಯಾನಂ
ಹಾಸ್ಯವ ಬೀರುತ ನಗುತಿಹುದೊ!
ದಿನಮಣಿಯುದಯದಿ ಮುದದಿಂ ಖಗಕುಲ
'ಜಯ ಜಯ'ನಾದವನೆಸಗುವುದೊ!

೪

ಹುದುಗುವ ಕತ್ತಲ ಮೊತ್ತವನೆತ್ತಲಂ
ಮೂಡಲ ಕೆಂಪದು ತಳ್ಳುತಿರೆ.
ಸಂತಸಸುಗ್ಗಿಗೆ ಇಬ್ಬನಿಸೋನೆಯ
ಸೀರ್ಪನಿ 'ಪನಪನ' ಪನಿಯುತಿರೆ.

೫

ಪ್ರಾತರ್ಲಕ್ಷ್ಮಿಯು ಕಿಲಕಿಲ ನಗುತಲಿ
ಬೆಡಗನು ಬೀರುತ ಬರುತಿಹಳೊ!
ನವನವಪುಷ್ಪದ ಬಟ್ಟಲನೆತ್ತುತ
ನವವಧು ವರಿಸಲು ನಿಂದಿಹಳೊ!

೬

ಮೆಲುಮೆಲ ಲೀಲಾನಾಟಕರಂಗದ
ಪಟಪರಿವರ್ತನವಾಗಿಹುದೊ!
ಆ ಕಣ್ದಾವರೆ ದಿವ್ಯಜ್ಯೋತಿಯಂ
ಮರೆಯಂ ಸೇರಲು ಬಿಂದಿಹುದೊ!

೭

ಗೆಲ್ಲವನೊಲಿಸದೆ "ನೊಪ್ಪನೆ" ಮುಸುಕನು
ತಳ್ಳಿಸಿ ಥೊಪ್ಪನೆ ಮುಳುಗಿದನೊ!
ನಿಶೆಯೊಡವೆರಸುತಲಡಗಿದ ಚಂದ್ರನು
ಮುನ್ನಿನ ಬಾಳನು ಚಿತ್ರಿಪನೊ!

೮

ಮೂಡಣ ಬೆಟ್ಟವ ಮೆಟ್ಟುತ ಬಂದುದು
ಗೋಲಾಕಾರದ ವಜ್ರವಿದೊ!
ಕಪ್ಪನು ಮೆಚ್ಚದ ರಾಜೇಂದುವಿನಾ
ಅಳಿವನು ಸೂಚಿಪ ಇರವಿದುವೊ!

೯

'ಹೊಳಹೊಳ' ಹೊಳೆಯುತ, 'ಥಳಥಳ' ಥಳಿಸುತ
'ಝಗಝಗ' ಝಗಿಸುತಲೇರಿದನೊ!
ಅತ್ಯುದ್ದೀಪನಪ್ರಭೆಯನು ಮುಚ್ಚುತ
ಬೀರುತ ಲೋಕವ ಬೆಳಗಿದನೊ!

೧೦

ಗಗನಾಂಗಣದಲಿ ನೆಟ್ಟನೆ ನೋಲಕೆ
ಬಟ್ಟೆಯನಾಗಿಸಿ ಧಾವಿಪನೊ!
ನಿರ್ಮಲಚಿತ್ತದ ಸಜ್ಜನನೆಂದುಂ
ಕೊಂಕಿನ ದಾರಿಯನಿಳಿಯುವನೊ!



# ಬೆಳಸು

೧

ಮುಂಜಾವದ ಸೆರೆ ಮಂಜಿನ ತಣ್ಣಿಸಿ
ಭೃಂಗಾರಾಮವ ನೋಡಲ್ಲಿ
ಪ್ರಾತಃ ಸಂಧ್ಯಾರಾಗದ ನಿಲುಮೆಯು
ತೊಟ್ಟಿಲ ಕೂಸೆ ಬಾರಿಲ್ಲಿ.

೨

ಪ್ರತಿಭೆಯ ಸುಮಗಳು, ವಜ್ರದ ಮಣಿಗಳು
ನೇಸರವೇ ಹೊಂಗಿರಣಗಳು.
ಶಾದ್ವಲಶ್ಯಾಮಲಮಮ–ಭೂಮಾತೆಯು
ಮಡಿಲಲಿ ಶೋಭಿಪ ವಿಭವಗಳು.

೩

ತಳಿರಿನ ತೋರಣ, ಮಿರಮಿರ ಜಾಲರಿ
ಸುಪ್ರಾಚೀದಿಶೆಯಂಗಣದಿ
ಕವಿತಾಕಾಮಿನಿ ಅಭಿನವಭಾವದಿ
ಹಾವದಿ ನಲಿವಳು ರಂಗಣದಿ.

೪

ಕವಿಕುಲ ಮಾನಸ ಗಂಗಾ ಲಹರಿಯು
ಹರಿಯುವುದಾಕಡೆ ನೋಡಲ್ಲಿ.
ಸ್ವನಯೋನ್ಮೀಲಿತ ಭಾವಸಮಾಕೃತ
ಕಲೆಗಳ ಮೇಳನ ತೋರಿಲ್ಲಿ.

೫

ನೆಲವಿದು ರಸಕವಿ ನರ್ತನ ರಂಗವು
ವ್ಯೋಮವೆ ರವಿಕವಿಯಂಗಣವು.
ಬಾನ್ನೆಲಸಗ್ಗಗಳೆಲ್ಲೆಲೆ ಇಹುದಲೆ
ರಸಕವಿ ದೃಷ್ಟಿಯ ವಿಹರಣವು.

೬

ಕಲೆಯೊಡವೂಡಿರೆ ಭಾವದಿ ಬೆಳೆದಿರೆ
ಬೆಳಗಿತು ಲೋಕವ ಕೃತಿಬೆಳಕು.
ಇಲ್ಲಿ ಜಗತ್ಕವಿ ಸುಂದರ–ಶಿವಮಯ–
ಸತ್ಯದಿ ಬೆಳೆಸಿದ ಕೃತಿ–ಬೆಳಸು.



# ಜಗದೊಡೆಯನ ತೋಟ

೧

"ದೂರದ ಬೆಟ್ಟ ನುಣ್ಣಗೆ" ಸತ್ಯ.
ಇದುವೇ ಅಚ್ಚರಿಯು.
ಬೀರಿದ ನೋಟ, ಮನ ಚೆಲ್ಲಾಟ.
ಅಚಲತೆ ಕಿಚ್ಚಡಿಯು.

೨

ಎಲ್ಲವು ಇಹವು ಯಾವುದು ಇಲ್ಲ.
ಯಾರದು ಈ ತೋಟ?
ತರತರ ಬಳ್ಳಿ, ತರತರ ಮರವು
ಜಗದೊಡೆಯನ ತೋಟ.

೩

ಚಿಗುರಿವೆ ಕೆಲವು, ಒಣಗಿವೆ ಹಲವು
ಕೊರಗುತಲಿವೆ ಬಾಧಿ.
ನಿಲವಿನ ನೋಡಿ, ತಲೆಯಲ್ಲಾಡಿ
ಇದೆ ಮೊಗ್ಗಿನ ಮೋಡಿ.

೪

ಪನ್ನೀರಿಹವು, ಮಲ್ಲಿಗೆಯಿಹವು.
ಮರಗಿಡವನಿತಿಹವು.
ತೋಟವದೊಂದು ಅದರೊಳಗೆಲ್ಲವ
ತಿಳಿದವವೆನಿತಿಹವು?

೫

ಎರೆಯಲು ನೀರು, ಹೀರಿವೆ ಬೇರು
ಎಲ್ಲಿಂದೆಲ್ಲೊ ಅವಕೆ!
ತನ್ನದರುಂಡು ಪರಧನವೆಳೆವ
ಪರಿಪಾಟವೆ ಜಗಕೆ

೬

ಒಂದೋ ಎರಡೊ ನಾಲ್ಕೋ ಆರೊ
ತರುಲತೆ ತಲೆದೂಗಿ
ಬೀರುತ ಕಂಪ, ಎಬ್ಬಿಸಿ ಜಗವ
ಫಲಿಸಿವೆ ಹೂವಾಗಿ.

# ಕುಂದಬೆಟ್ಟ

೧

ಕುಂದನಾನದೆ ನಿಂದ ಬೆಟ್ಟವೆ
ನಿನ್ನ ಪೆಸರೇನ್ 'ಕುಂದ'ವೆ!
ಕುಂದಿ ಪೋಗದೆ ಎಂದಿಗೆಂದಿಗು?
ನಿನ್ನ ವೈಭವ ವಂದವೆ?

೨

ಯಾವ ಮಿಗಗಳು ನೆಗೆಯುತಿಲ್ಲಾ
ನಿನ್ನ ಬೆನ್ನಿನ ಮೇಲೆಯೋ!
ಆರ ಜೀವನ ಸಾಗುತಿಲ್ಲಾ
ನಿನ್ನ ಗರ್ಭದೆ ಬಿಡದೆಯೆ?

೩

ಕರಿಯು ನೀನೇ, ಹರಿಯುನಾನುವೆ
ತಂದೆಯೋನ್ನೈ ಸೋಜಿಗ!
ಧರಿಸಿ ವಿಧವಿಧ–ವನ್ಯಸಂಪದ
ಮಾರುತಿಹೆಯುಲ ಬಣಜಿಗ.

೪

ಆವ ರಣವಿದೆ? ಭೇರಿ ಮೊಳಗಿತೆ?
ಕದಲದೇಕೈ ನಿಂತಿಹೆ?
ಸ್ಫೂರ್ತಿದಾಯಕ ಕೀರ್ತಿಗಾನಕೆ
ಕೈಯಿದೆನ್ನದು ನಿಂತಿದೆ.

೫

ಶಿರವನೆತ್ತಿಹೆ ಬಯಲಿಗಾಗಿಯೆ
ಗುಹೆಯ ಕಣ್ಣಿಂ ನೋಡುವೆ.
ಏನಿದಚ್ಚರಿ! ಭೀಕರತೆಯಿದು!
ಮಲಗಿದಾನೆಯೆ ನೀನಹೆ!

೬

ತನ್ನೊಳೇನನು ಜಪಿಸುತಿರುತಿಹೆ?
ಪೇಳು ನಿನ್ನಯ ಪಳಮೆಯ.
ದೇವಮಂದಿರ ಶಿರದಿ ಶೋಭಿಸೆ
ಏನ ಬಣ್ಣಿಪೆ ಮಹಿಮೆಯ!

೭

ಪಾದದಗಲದ ಬರೆಯ ಪಕ್ಕದ
ಕಲ್ಲ ಮೇಲೊಳು ತಿರುಗಲು,
ಒಲುಮೆ ಬೆರಸುತ ಹರನು ಹರಸಲು
ಬಂಜೆ ತಾಯ್ತನ ಪಡೆವಳು!

೮

ಕ್ರಾಂತಿಶಾಂತಿಗು ಗುರುವೆ ನೀನೈ
ತತ್ವದೊಸಗೆಯ ನೀಡುವೆ.
ನಿನ್ನ ನೋಡುವ ಕಣ್ಣು ಕಣ್ಣಿಗೆ
ಬಣ್ಣ ಬಣ್ಣದಿ ಮಿರುಗುವೆ.

೯

ಭಾವದೊರತೆಯ ತರಿಸಿ ಮನದೊಳು
ಕಾವ್ಯರೂಪದಿ ಮೂಡಿದೆ.
ಕವಿತೆ ತಿಳಿಸುದು ಸರಸಭಾವದಿ
ನಿನ್ನ ಕೀರ್ತಿಯ ಹಾಡಿದೆ.



# ಶಕುಂತಲಾ ಪ್ರಾಪ್ತಿ

೧

ಆವನಿವನೊ ಯತಿವರೇಣ್ಯ!
    ಕಾಡೊಳಲೆಯುತಿರುವನು!
ಸಾವಧಾನ-ಗತಿಯ ನಿಡುತ
    ಮುಂದುನಡೆಯುತಿರುವನು!

೨

ಶಾಂತಿದಾಂತಿ ಬೆಳಕುವಡೆದು
    ರೂಪುದಾಳಿ ಪೋಪುದು.
ಕಾಂತಿಮಹಿಮ, ಸತ್ಯಕಾಮ
    ಭೂತಿಧಾಮ ವಿರುವುದು.

೩

ಹಣೆಯೊಳೇನು ಭಸ್ಮಲೇಪ! ವಿ-
    ಭೂತಿಪುರುಷನಿರುವನೆ!
ಮನವದೇನು ಹುಡುಕುತಿಹುದು!
    ಭವದ ಪಾರವರಿದನೆ!

೪

ಪುಣ್ಯ-ಬಂಧ-ಪುಂಜದಂತೆ
    ಸಮಿಧೆ ಕೈಯೊಳಿರುವುದೇ?
ಕಣ್ವಮುನಿಯೆ! ತಿಳಿವ ತೊರೆಯು
    ಮೆಲ್ಲಮೆಲ್ಲನೆ ಸರಿವುದೇ?

೫

'ಕಿರೊ' ಎನುವ ಅಳುವ ದನಿಯು
ನುಗ್ಗಿ ಬಂದಿತೊಮ್ಮೆಲೆ
ಅರಣ್ಯ ಗರ್ಭವೊಡೆದು ಮುನಿಯು
ಗರ್ಭಕಲಕಿತಾಗಲೆ.

೬

ಮನದಿ ಧ್ಯಾನ ಜಗುಳಿತಂದು
ಹೃದಯು 'ಏನು' ಕೇಳಿತು.
ಸನಿಹ-ಸನಿಹ-ಸನಿಹ ಸಾರಿ
ತನುವು ಮುಂದೆ ಸಾಗಿತು.

೭

ಹೊನ್ನ ಮೈಯ ಚಂದ್ರಮುಖದ
ಹಸುಳೆಯೊಂದು ಅಳುವುದು.
ಚೆನ್ನರೂಪ ಹೆಣ್ಣು ಮಗುವು
ಮುನಿಯ ಮನವ ಸೆಳೆವುದು.



## ಬಾಳು—ಬೆಳಕು

ಓವೊ ಎನ್ನ ಬಾಳ ಬೆಳಕೆ
ಮನದ ತಿಮಿರಹಾರನೆ.
ಅಚ್ಛಸ್ವಚ್ಛವಿಶ್ವಶಾಂತಿ
ನಿನಗೆ ಎಣೆಯುನಾವನೆ!

ಸತ್ಯವಿಲ್ಲ, ಮಿಥ್ಯವಿಹುದು
ಹೃದಯ ಬೆಂದು ಬಳಲುತಿಹುದು।
ಸತ್ಯವಚನ ನುಡಿಯೊಳಗ
ಕೃತ್ಯ ಲೋಕಕಂಟಕಂ॥

ಮೋಡ ಕವಿದು ಮುತ್ತುತಿಹುದು
ನೀರಬಟ್ಟೆದೋರದಿಹುದು।
ನೇಹಮಿಂಚು ಮಿನುಗದಿಹುದು
ಅಹೋರಾತ್ರಿ ಸಂಕಟಂ॥

ಜ್ಞಾನಕಿರಣ ಮುಳುಗುತಿಹುದು
ಮೋಹಪ್ರೇಮ ಹೆಚ್ಚುತಿಹುದು।
ಹಿಂಸೆಮೋಸಕಪಟಕಿಂದು
ದಾತರಾಗಿ ಕೀರ್ತನಂ॥

ಬಾಯೊಳಕಟ ಹೊಟ್ಟೆ ಕೂಗು
ಬೆನ್ನಹಿಂದೆ ಕೋಪದಲಗು।
ಮುಸುರುತಿರಿದ ಸೆಳೆವ ಪದೆದ
ತಾಂಡವವೇ ನರ್ತನಂ॥

ಶಾಂತಚಿತ್ತ ಶಾಲೆಯಲ್ಲಿ
ಯುದ್ಧಭೇರಿ ಮೊಳಗುತಿಹುದು।
ಶಾಂತಿಯೆದುರು ವಿಷದ ಮಾಟ
ಕ್ರಾಂತಿವೈರಿ ಮತ್ಸರಂ॥

ಧ್ಯಾನಕಿಂದು ತಾಣವೆಲ್ಲಿ?
ದುಷ್ಟಸ್ವಾರ್ಥಭಾವಕಿಲ್ಲಿ।
ಉಸಿರು ಮೇಲಕೋಡುತಿಹುದು
ಅಮಲಸತ್ಯ ಕುತ್ಸಿತಂ॥

ಸತ್ಯದೀಪ್ತಿ ಪಿಡಿದು ನಿಂದು
ದುಃಖಸುಖವ ಕೂಡುತಿಂದು।
ಜನದ ಮನದ ಮೋಹ–ಪಟಲ–
ವಳಿಸುತಿರಲು ಬಾಳದು॥

ನುಡಿಯ ಸೇವೆಗೈಯುತೀಗ
ಸತ್ಯಭಾವವರುಹುತಿರಲು।
ಸಮತೆ ಬರಲು ಮುದವ ತರಲು
ಶಾಂತಿಕೊಡಲು ಬೆಳಕದು॥



# ಒಂದಾಗಿ ದುಡಿಯುವುದೆ ಬರಲಿ

೧

ಸ್ವಾತಂತ್ರ್ಯದೆಳಗೂಸು
ನವವರ್ಷದೆಳವೆಯಲಿ
ನವಶಕ್ತಿನವದೀಪ್ತಿಯಿಂ ನಗುತಲಿರಲು||
ಆತುರದ ನಗೆಯಾಟ
ಹೆಕ್ಕಳದ ಸೊಗಕೂಟ
ಸ್ವಾಗತಿಪೆ ನಲಿನಲಿದು ಕುಣಿಕುಣಿದು ಬರಲು||

೨

ಸ್ವಾತಂತ್ರ್ಯವೇ ಸ್ವರ್ಗ
ಪಾರತಂತ್ರ್ಯವೆ ನರಕ-
ವೆನ್ನುತಿದೆ ಹೃದಯದಲಿ ನಿನ್ನಮುರವಾಣಿ||
ಜಾತಿಭಾವನೆ ಕಾಣೆ
ಐಕ್ಯಗಾನದ ವೀಣೆ
ಮೀಟುತ್ತ ನುಡಿಸುತಿದೆ ನಿನ್ನಭಯಪಾಣಿ||

೩

ಭಾರತವೆ ನಂದನವು,
ಇದುವೆ ಕ್ರೀಡಾಂಗಣವು
ಮುದವ ತರೆ ಬರುತಲಿದೆ ನವಚೈತ್ರಮಾಸ||
ಏರುತಿದೆ ನವಕಲೆಯು
ಭಾರತದ ಚಂದಿರನ
ಹಿಗ್ಗುತಿಹುದೆಂತಂತೆ ಸನ್ಮನದ ಕೋಶ||

೪

ಭಾರತೀಯರೆ ನಾವು
ಭ್ರಾತೃಗಳು, ತಮ್ಮೊಳಗೆ
ಹಿಂದುಮುಸ್ಲಿಂ ಕ್ರಿಸ್ತಸಿಕ್ಖರೆಂದಿರಲಿ॥
ನಾಮಮಾತ್ರಕೆ ತತ್ವ-
ವ್ಯಕ್ತಿದೇಶದೊಳೇನು?
ಎಲ್ಲರೂ ಒಂದಾಗಿ ದುಡಿಯುವುದೆ ಬರಲಿ॥

೫

ಭಾರತದಧೀಶ್ವರಿಯೆ!
ಕೈಯೆತ್ತಿ ಹರಸಮ್ಮ
ಮುನ್ನಡೆವ ಧೀರತನ ಜೆಳೆಬೆಳೆಯುತಿರಲಿ॥
ಭಾರತಾಂಬೆಯೆ ನಿನ್ನ
ಸ್ವಾತಂತ್ರ್ಯದೆಳಗೂಸು
ಚೆಲ್ಲಕುಣಿತವನೆಮಗೆ ತೋರಿಸುತಲಿರಲಿ॥

೬

ಹಿಮಗಿರಿಯನೇರಲಿರೆ
ಸಾಗರವೆ ದಾಂಟಲಿರೆ
ಎಮ್ಮೆದೆಯು ಕೆಚ್ಚೆಂದು ಬರಿದಾಗದಿರಲಿ॥
ವ್ಯೆಮೆಮೂರುತಿವೆತ್ತ
ಕೀರ್ತಿಗಾನವ ಪೆತ್ತ
ನಿನ್ನ ಜಸಜೌವ್ವನದಿ ನವಸ್ಫೂರ್ತಿ ಬರಲಿ॥

# ಕನ್ನಾಡು

೧

ಕನ್ನಡದ ನುಡಿಗೇಳೆ, ಒಲುಮೆ ಕೀರುತಿ ಕೇಳೆ
ಕನ್ನಡಿಗನಾರವನು ಹುಚ್ಚೇಳನು?
ಕನ್ನಡದ ಫಲದಿಂಪು, ಮೆಲುಸೊಲ್ಲ ತನಿಗಂಪು
ಮಂದಮಾರುತಕಾರು ನವಿರೇಳನು?

೨

ಕನ್ನಡದ ನೆಲಕಾಗಿ ಹೊಲಕಾಗಿ ಜಲಕಾಗಿ
ಕೆಚ್ಚುದೋರಿದರೆಸಿತು ಕನ್ನಡಿಗರು!
ಕನ್ನಡದ ತನುಕಾಯೆ ಮನಕಾಯೆ ಜನಕಾಯೆ
ಹರಣನೀಗಿದರಿಲ್ಲಿ ಜನರೆನಿಬರು!

೩

ಕನ್ನಡದ ನೆಲವೊಂದು ಬದುಕೊಂದು ನುಡಿಯೊಂದು
ನೆನಸುದೋರಿಹುದಿಂದು ಕನ್ನಡವದು.
ಕನ್ನಡಮ್ಮನ ಮಕ್ಕಳೆಲ್ಲರೊಂದಾಗಿರಲು
ಬಾಳ ನಡೆಯುಲಿ ನಡೆಗೆ ಕನ್ನಡವದು.

೪

ಕನ್ನಡದ ತಿಳಿನೀರಿನೊರ್ಕುಡಿತೆ ಕುಡಿದಿಟ್ಟು
ಎನಿತು ಕವಿಜನವು ಜಸವಾಂತುದಿಲ್ಲ!
ಕನ್ನಾಡ ಸೊಬಗಿಂದ ಬೆಡಗಿಂದಲೆನಿಬರದೊ
ಕನ್ನಡದ ಸುಮಲತೆಯು ಬೆಳೆಸಲಿಲ್ಲ!

೫

ಆದಿಕವಿಯೋಜೆಯದು ರನ್ನಕವಿ ವೈಸಿರಿಯು
ಕಣ್ಣಮಯ್ಯನ ಜಾಣ್ಮೆ ಜನ್ನಜಸವೇನು!
ಓದುಗಬ್ಬಗಳೇನು! ಹಾಡುಗಬ್ಬಗಳೇನು!
ಜಾನಪದ ಗೀತಗಳ ಸೊಬಗದೇನು!

೬

"ಕರ್ಣಾಟಕವಿಚೂತವನ ಚೈತ್ರ" ಲಕ್ಷ್ಮೀಶ-
ನೆನಿತು ಸಿರಿ ಇತ್ತಿಹನು ಕರ್ಣಾಟಕೆ
ಕರ್ಣಾಟಜೈಮಿನಿಯು ಕರ್ಣದೊಳಗಾಟಸುತ
ಜಾಗೃತಿಯನೀಡುತಿದೆ ಕರ್ಣಾಟಕಕೆ.

೭

ಹಳತು-ನಡು-ಹೊಸತೆಂಬ ಮೂರುಹಂತಗಳಿಂದ
ಜೈನ-ಶೈವಾಚಾರ--ಬ್ರಹ್ಮವೇದಿ
ನಳನಳಿಸಿ ಕನ್ನಡದ ಬಳ್ಳಿಯುಲಿ ತಳೆಸಿದರು.
ಅಮಿತಸುಮ, ನೀಡುವನು ತತ್ವವೇದಿ.

೮

ಪದ್ಯಗದ್ಯಗಳೆಂಬ ಕುಂಜವನದಲಿ ರಮ್ಯ-
ಗೀತೆಗಳ ಹಾಡುವನು ಕವಿ-ಕೋಕಿಲ
ಹೃದ್ಯವೆಲ್ಲವನಾಂತು ದನಿಗೂಡಲೆಳಸುತಲಿ
ಕನ್ನಾಡು ಕುಳಿತಿಹುದು ನೀನೋಡೆಲಾ

೯

ಕಲಿಯು ತ್ರೇತವದಾಗೆ, ತ್ರೇತಕಲಿಯುಗವಾಗೆ
ಕನ್ನಡದ ನಾಡೆಂದು ಬರಿದಾಗದು.
ನಿಲುವೆವಳ್ಳಿಯು ಕೊನರಿ ಚಿಗುರಿಟ್ಟು, ಹೂವಿಟ್ಟು
ಅಮೃತಫಲ ಕೊಡುತಿಹುದು ಹುಸಿಯಾಗದು

೧೦

ಕನ್ನಡವೆ ನಮ್ಮುಸಿರು ಕನ್ನಡವೆ ಜೀವನವು
ಕನ್ನಡಿಗರೆಲ್ಲಿದ್ದರೂ ನಾವು ದಿಟವೆ.
ಕನ್ನಡದ ಕವಿವಾಣಿ ಎಚ್ಚರಿಪುದಿನ್ನೊಮ್ಮೆ
"ಸಿರಿಗನ್ನಡಂಗೆಲ್ಗೆ" ಎಂದುಸುರುವೆ.



# ಯುಗಾದಿ

೧

ದಿನಬೆಳಗಾಗಿರೆ
ಜಡತನವಡಗಿರೆ
ಪ್ರಕೃತಿಗೆ ಚೇತನ ಬರುವಂತೆ
ನೇಸರ ಕಿರಣದ ಬೆಳಕಂತೆ
ಉಲ್ಲಾಸದ ತೊರೆ
ಬಾಳಿನಬಯಲಲಿ
ತುಂಬುತ ಹರಿಯಲಿ ನೆರೆಯಂತೆ
ಕಳೆದುದು ಕಳೆಯಿತು
ಬರುವುದು ಬರಲಿ
ದುಃಖವೊ ಸುಖವೊ ಎನಗಿರಲಿ
ಬೇವಿನ ಬೆಲ್ಲದ
ಕಹಿಸಿಹಿಯೇನದು
ಅದುವೇ ದ್ರಾಕ್ಷಾರಸವಿರಲಿ

೨

ಹೊಸತನ ಬಂದಿರೆ
ಸುಗ್ಗಿಯು ತಂದಿರೆ
ಹುಣ್ಣಿಮೆ ಚಂದ್ರನ ಕಳೆಯಂತೆ
ಆಶಾಜ್ಯೋತಿಯ ಬೆಳಕಂತೆ

ಸಂತಸದೋಜೆಯು
ಪನ್ನೀರ್ ಹನಿಯಲಿ
ಜೀವನ ಪಥದಲಿ ಹೂವಂತೆ.
ವಿರಸವ ಸರಸದಿ
ಜಗ್ಗಿಸಿ ಕುಗ್ಗಿಸಿ
ಯುಗಾದಿಯೊದಿನ ಬರಬರಲಿ.
ದಿನ ಬೆಳಗಾಗಲು
ಹೊಸತನ ಮೂಡಲಿ
ನವನವ ಭಾವನೆ ಬರುತಿರಲಿ



# ಆತ್ಮ

ಲೋಕ ಬೆಳಗುವುದಾತ್ಮ ಬೆಳಗಲು
ಲೋಕವಾತ್ಮನೊಳಾತ್ಮ ವೊದಲಿಗ-
ನೇಕಮಾತ್ರವೆ ಬೇಕು ಮಾನವಗಾತ್ಮವಿಜ್ಞಾನ||

ಸಾಕು ಸಾಧನಸಂಚಯುವು ಅವಿ-
ವೇಕಹರಣದಿ ಸುಪ್ತಚೇತನ
ವೇಕರೂಪದೊಳೊಡೆದು ತೋರುವುದಾತ್ಮಸಂಪದವ||



# ಮಿಂಚುಹುಳ

೧

ಮಿಂಚುತಲಿರುತಿಹೆ
ಮಿಂಚಿನ ಗೊಂಚಲ
ಸಂಚಿಯೆ ನೀನೈ ಮಿಂಚುಹುಳ॥
ಮುಂಚುತ ಕಾಡಿನ
ಅಂಚಿನಲಿರೆ ಪ್ರ-
ಪಂಚವ ಬೆಳಗುವ ದೀಪಕುಲ॥

೨

ಜಗನಿನ್ನರಿಯುದು
ಮಿಗೆ ಬೆಳಕರಿಯುದು
ಸೊಗದೊಟ್ಟಲಿನೊಳು ನಗುತಲಿಹೆ॥
ಅಗಲದೆ ನೀ ಕಾ-
ಡಿಗನೇಹಿಗನಿಗೆ
ಒಗೆಯುವೆ ಬೆಳಕಿನ ಚಿಗುರಂತೆ॥

೩

ಮಿನುಗುವೆ ತಾರೆಯ
ನಣಕಿಸು ವಂದದಿ
ತನಿಗೆದರುವೆ ತನಿಗಿಡಿಯನ್ನು॥
ಮಿಣುಕುತ ಮುಳುಗುತ
ಜನಜೀವನ ಗತಿ-
ಯನು ತೋರುತಲಿಹೆ, ದರ್ಶನ॥

# ಬಸವೇಶ್ವರನನ್ನು ನೆನೆದು

ರಾಮಾಯಣ ಕೃತಿಯೆನಿಸಿತು ಕವಿವಾ-
        ಲ್ಮೀಕಿಯ ಭಾವೋದ್ಗಾರ।
ಬಸವೇಶನೆ! ಈ ಕನ್ನುಡಿ ತುಂಬಿದೆ
        ನಿನ್ನಯ ವಚನೋದ್ಧಾರ।
                ಅದುವೇ ಮೋಕ್ಷದ ಎಳೆದಾರ,
                ತುಂಬಿದೆ ಜೀವನಕಾಸಾರ,
                ತೋರಿದೆ ಮನುಜನ ಬೇಹಾರ॥
ನೀನೊರೆದಿಹ ನುಡಿಯೆಲ್ಲವು ಬರಿನುಡಿ-
        ಯಲ್ಲವು, ಅವೆ ನುಡಿಮುತ್ತು।
ಆ ಮಹದೇವನ ಅಡಿಯೆಡೆ ಸೇರುವ
        ರಹದಾರಿಯದೀ ಗೊತ್ತು
                ಬಿತ್ತಿದೆ ಬಕುತಿಯ ಬಿಡಿಬಿತ್ತು
                ಅರುಹಿದೆ ನಿಜಜೀವನದೊತ್ತು
                ತಿನಿಸಿದೆ ಅಮೃತದ ಸವಿತುತ್ತು.

*          *          *          *          *          *

ರಾಮಾಯಣ ಕೃತಿಯೆನಿಸಿತು ಕವಿವಾ-
        ಲ್ಮೀಕಿಯ ಭಾವೋದ್ಗಾರ।
ಬಸವೇಶನೆ! ಈ ಕನ್ನುಡಿ ತುಂಬಿದೆ
        ನಿನ್ನಯ ವಚನೋದ್ಧಾರ॥



# ಅಗ್ನಿಕುಂಡ

೧

ಸಂಸಾರವು, ಓ ಇದು ಅಗ್ನಿಯ ಕುಂಡ ।
ನಾವೈ ಮಾನವರಾಹುತಿಯು ।
ಆಜನದೀಜನ ದಿಂಧನದಿಂದ,
ದ್ವೇಷಾಸೂಯೆಯ ಘೃತದಿಂದ,
ಕಡುಪಿಸುಣಿನ ಮಾರುತದಿಂದ
ಹೊತ್ತಿತು 'ಧಗಧಗ' ಬಾನೆತ್ತರವು
ಸಂಸಾರವು! ಓ, ಇದು ಅಗ್ನಿಯ ಕುಂಡ!

೨

ಸಾಂಸಾರಿಕ– ನೋಡಿದೆನಗ್ನಿಯ ಕುಂಡ
ತುಂಬಿದೆ ಕಳವಳದಾ ಹೊಂಡ,
ಸುಳ್ಳಿನ ಕಿಡಿಗಳೆ ಅದೋ! ಹಾರುತಿರೆ.
ಬಡತನ ಬೇಗೆಯು ಹೆಚ್ಚುತಿರೆ,
ಜೀವನದೊರತೆಯು ಆರುತಿರೆ,
ಸುಟ್ಟಿತು ವೈಮನ ತಲೆಯೆತ್ತರವು
ಸಾಂಸಾರಿಕ ನೋಡಿದೆನಗ್ನಿಯ ಕುಂಡ!

೩

ಕವಿಯೈ ನಾ ನೋಡಿದೆನಗ್ನಿಯ ಕುಂಡ
ಬೆಳೆದಿದೆ ಮೂಢತೆ ಬಲುಚೆಂದ!
ಸಿರಿವಂತರೆ ಅಹ! ಡೊಂಬರು ಇಲ್ಲಿ

ಬಡವರೆ ಕುಣಿಗೊಂಬೆಗಳಿಲ್ಲಿ
ಮಾನವತನ ಸೊನ್ನೆಯದಿಲ್ಲಿ
ಚಿತ್ರವೆ ತುಂಬಿದೆ ನೆಲಬಿತ್ತರದಿ,
ಕವಿಯೈನಾನೋಡಿದೆನಗ್ನಿಯ ಕುಂಡ.

೪

ಜ್ಞಾನದಿ ನೋಡಿದೆ ನಾ-ನಗ್ನಿಯ ಕುಂಡ
ತಾಂಡವವಾಡಿದೆ ಮಾಯೆಯದು.
ನಿಂದೆಯೆ ಜನಜೀವನವೃತ್ತಿಯದು
ಜಾತಿಯ ಹಿಗ್ಗಿನ ನೀತಿಯದು
ಹೇಸಿತು ಮನವಿದು ತನ್ನಲ್ಲೆ.
ಅಹಿತವು ನಿಂತಿದೆ ಮನದೆತ್ತರವು
ಜ್ಞಾನದಿ ನೋಡಿದೆ ನಾನಗ್ನಿಯಕುಂಡ



# ಎರಡು ಮೊಗ

ಸಗ್ಗದ ವೈಭವ
ಬುವಿಯೊಳು ತೋರಿಪ
ಪ್ರಕೃತಿಯು ರಾಣಿಗೆ ಎರಡುಮೊಗ ।
ದಿನದಿನ ಬಾಳಿನ
ಕನ್ನಡಿ ತೋರುತ–
ಲಿದ್ದರು ತಿಳಿಯದು ಇದುವೆ ಜಗ ॥

*   *   *   *   *   *

ಚಕ್ಕನೆ ಬೆಳಕಿನ
ಸೂಡಿನ ಬೀರಿ
ನಗುಮುಗುಳಾಗಿಹ
ಹೂವಿನೊಳೇರಿ
ಜೇನಿನ ಸೊದೆಮನಿ
ಗೆಲ್ಲರಿಗೂಡಿ
ಮೂಡಲ ನೆಲದಲಿ
ಕುಣಿಕುಣಿದಾಡಿ
ಚೇತನಮೂರುತಿ ಬರುತಲಿದೆ,
ಸುಂದರ ಕಲ್ಪನೆ ತರುತಲಿದೆ,

ಪಡುವಣ ಮೋರೆಯು
ಕಾಂತಿವಿಹೀನ

ಗೆಲುನಲವಿರದ್ಯೈ
　　ಚಂದಿರ ಮೋನ
ನೈದಿಲೆ ಮುಗಿದಿತು
　　ತೇಜೋಹೀನ
ಕಂಬನಿಯುದುರಿತೆ
　　ಬಾವ್ಮೊಗದೀನ

ಮೂಕತೆ ಬಣ್ಣವ ಬಳಿಯುತಿದೆ
ನಿರ್ಜೀವತೆ ದನಿಗೂಡುತಿದೆ.



# ಮುಂದಕೆ

ನೋಡು ಮುಂದಕೆ ಓಡು ಮುಂದಕೆ
ಹೋಗು ಮುಂದಕೆ ಮುಂದಕೆ
ಮಾಡು ಒಳಿತನು ಕೂಡು ಹಿತವನು
ಸಾಗು ಮುಂದಕೆ ಮುಂದಕೆ.

ಮುಂದೆ ನೋಡಿತು ವಿರಾಂ ನೆಗೆಯಿತು
ನಳಿಸಿ ಗಿಡಮರವಾಳಿಯಿತು
ಹಿಂದು ನೋಡದೆ ಉಬ್ಬ ಕೂಡದೆ
ಕಡಲ ತೆರೆ ದಡಬಡಿಯಿತು.

ನೋಡು ಮುಂದಕೆ ಓಡು ಮುಂದಕೆ
ಹೋಗು ಮುಂದಕೆ ಮುಂದಕೆ
ಮಾಡು ಒಳಿತನು ಕೂಡು ಹಿತವನು
ಸಾಗು ಮುಂದಕೆ ಮುಂದಕೆ.

ಉದಿಸಿ ನೇಸರು ಅಳಿಸಿ ಕತ್ತಲು
ಮುಂದು ತಾನ್ ಗುರಿ ಸೇರಿತು
ಕಲ್ಲೆ ನಿಂತರು ಬೆಟ್ಟವಿದ್ದರು
ತೊರೆಯು ನೀರ್ ಹೊಳೆ ಹರಿಯಿತು.

ನೋಡು ಮುಂದಕೆ ಓಡು ಮುಂದಕೆ
ಹೋಗು ಮುಂದಕೆ ಮುಂದಕೆ
ಮಾಡು ಒಳಿತನು ಕೂಡು ಹಿತವನು
ಸಾಗು ಮುಂದಕೆ ಮುಂದಕೆ

ಸಿಡಿಲಿನಂದದಿ ಮಿಂಚಿನಂದದಿ
ಹೊರಟ ದಾರಿಯು ಬಿಡದಿರು.
ಕಡಲಿನಂದದಿ ಬಾನಿನಂದದಿ
ಎದೆಯು ಬಿತ್ತರ ತಾಳಿರು.

ನೋಡು ಮುಂದಕೆ ಓಡು ಮುಂದಕೆ
ಹೋಗು ಮುಂದಕೆ ಮುಂದಕೆ
ಮಾಡು ಒಳಿತನು ಕೂಡು ಹಿತವನು
ಸಾಗು ಮುಂದಕೆ ಮುಂದಕೆ

ಕಲ್ಲೆ ರನ್ನವು, ನೆಲವೆ ಚಿನ್ನವು
ಬರಿಯ ಕಲುನೆಲವಲ್ಲವು
ಹುಲ್ಲೆ ವಜ್ರವು ಜಲವೆ ಅಮೃತವು
ದುಡಿಯೆ ತಾಳದೆ ಸಿಗುವುವು

ನೋಡು ಮುಂದಕೆ ಓಡು ಮುಂದಕೆ
ಹೋಗು ಮುಂದಕೆ ಮುಂದಕೆ
ಮಾಡು ಒಳಿತನು ಕೂಡು ಹಿತವನು
ಸಾಗು ಮುಂದಕೆ ಮುಂದಕೆ

# ದೀಪದ ಬೆಳಕು

ದೀಪದ ಹೃದಯಕೆ ಜ್ಯೋತ್ಯಾಧಾರ
ಬೆಳಕಿನ ಮೂಲಾಧಾರ।
ಮಾನವ ಹೃದಯವೆ ಶೀಲಾಗಾರ
ಬಾಳಿಗೆ ಆತ್ಮಾಧಾರ॥

* * * * * *

ಎಣ್ಣೆಯು ಬತ್ತಿಯು
ಸಾಧನಮಾತ್ರವು
ದೀಪವು ಉರಿಯುವುದು।
ಪ್ರಾಣವು ದೇಹವು
ನೋಟಕೆ ಎಲ್ಲವು
ಆತ್ಮವು ಹೊಳೆಯುವುದು॥
ಕರಿಕಿನ ಮೊಗ ಮೇ-
ಲ್ಕೀಡಲು ಮೆಲ್ಲನೆ
ಜ್ಯೋತಿಯು ಆರುವುದು।
ಅರಿತದ ಕುಡಿ ಕೆಳ-
ನೀಡಿರೆ ಜೀವನ
ಬರಿ ಬರಡಾಗುವುದು॥

ಕಾಡಿಗೆ ತೊಡೆಯಲು
ಕಲೆಯೊಡಬೆರೆಯಲು
ಬೆಳಕನು ನೀಡುವುದು।
ಅರಿಯುವೆಯುಳಿಯಲು
ಸಂಸ್ಕೃತಿ ತೋರಲು
ಲೋಕವ ಬೆಳಗುವುದು॥

* * * * * *

ದೀಪದ ಹೃದಯಕೆ ಜ್ಯೋತ್ಯಾಧಾರ
ಬೆಳಕಿನ ಮೂಲಾಧಾರ।
ಮಾನವ ಹೃದಯವೆ ಶೀಲಾಗಾರ
ಬಾಳಿಗೆ ಆತ್ಮಾಧಾರ॥



# ನಾಗರಿಕತೆ

ಇಂದು ನಮ್ಮ ನಾಗರಿಕತೆ
ತಿರುಳುಯಿರದ ಹೊಳ್ಳಿನಂತೆ
ಆತ್ಮ ಶೂನ್ಯ- ಹೃದಯದಂತೆ
ಧ್ವನಿಯೆ ಇರದ ಕಾವ್ಯದಂತೆ

ಬರಿದೆ ವಿತೆಯ ಕಂತೆಯು,
ಡಾಂಬಿಕತನದ ಕಸದ ಸಂತೆಯು||

ತೋಟವಂದ, ಒಳಗೆ ಸೊಪ್ಪು
ವೇಷವಂದ, ಮನವು ಕಪ್ಪು
ಬುದ್ಧಿಯಂದ, ನಡೆಹ ತಪ್ಪು
ಮೋರೆಯಂದ, ನೋಟ ತಪ್ಪು

ಬರಿಯ ತನ್ನ ಚಿಂತೆಯು
ಮನದಿ-ಭೇದಭಾವಕಂಥೆಯು||

ವಸ್ತು ಜ್ಞಾನವಲ್ಪಸ್ವಲ್ಪ
ವ್ಯಕ್ತಿಜ್ಞಾನ ಸೊನ್ನೆದಪ್ಪ
'ಚಿಗುರ ತಿಳಿವು' ಅಮೃತಕಲ್ಪ
ಎಂದು ತನಕ ಬಾಳ್ವೆಯಪ್ಪ!

ಶೋಚನೀಯವಾಗಿದೆ.
ಜನಕೆ-ಚಿಂತೆಯಿಲ್ಲದಾಗಿದೆ||

ಅಳಿಯಬೇಕು ಕೀಳುಮೇಲು
ಬೆಳೆಯಬೇಕು 'ಎಲ್ಲಮೇಲು'
ಶೀಲಸುಗುಣ ವೃಕ್ಷದೆಲ್ಲು
ಎಲ್ಲರಾತ್ಮ ಭೂಮಿಯಲ್ಲು

ದಿವ್ಯಶಾಂತಿ ಫಲವನು
ಬೆಳೆದು–ಬೆಳಸಬೇಕು ಮನವನು||



# ಕವಿ ಕೃಷಿಕನಿಗೆ..........

೧

ಉಳುಕವಿ, ನಿಷ್ಠುರ–
ಮಾನವರಂತರ
ನಿಜಪ್ರತಿಭಾಫಲ ಹಲದಿಂದ
ಜನಭೂಮಿಯು ಸಮ–
ಸುಂದರ ಮಾಡೈ
ಅನುಭವ ಖಾದ್ಯದ ಬಲದಿಂದ॥

೨

ಬಿತ್ತನೆಯೆಸಗೈ
ಜನಮನಕ್ಷೇತ್ರದಿ
ಅಮರಜ್ಯೋತಿಯು ಬೀಜದಲಿ॥
ಜನನವಜೀವನ–
ದಂಕುರದಿಂದಲಿ
ಜಗವಿದು ಹಚ್ಚನೆಯಾಗಿರಲಿ॥

೩

ಕಿತ್ತಿಸೆ ಸುಳ್ಳಿನ
ಕಂತೆಯು ಕಳೆಯುನು
ಪೃಥ್ವಿಯು ಮೆತ್ತನೆ ಮಣ್ಣಿಂದ
ನೆಲ ಫಲವತ್ತಾ–
ಗಲಿ, ಜನಮನವೀ
ತಣಿಯುಲಿ ವಾಣೀಜಲದಿಂದ॥

೪

ಸೊಗವನು ನೀಡೈ
ಮಾನವತೆಯು ಹೊಂ-
ಬಣ್ಣದ ಪೈರನು ಕೊಯ್ಯೆಂದು॥
ನಿನಗೆಯೆ ಲೋಕದ
ಮನೆಯಧಿಕಾರವು
ಜನಹಿತಭಾಂಡವ ತುಂಬೆಂದು॥



ಸುಮಿತ್ರಾನಂದ್ ಪಂತ್‌ರವರ "ಕವಿ ಕಿಸಾನ್" ಎಂಬ
ಹಿಂದೀ ಪದ್ಯದ ಆಧಾರದಿಂದ

# ಹೂದೋಟ

೧

ಅದೊ ಅಲ್ಲಿ ಹೂದೋಟ
ಕೈನೀಡಿ ಕರೆಯುತಿದೆ
ಮಧುವ ಹೀರುವ ತುಂಬಿ-
ಗಳೆ ನೀವು ಬನ್ನಿ॥
ಭೃಂಗದಾರಾಮವಿದೆ
ಮಂದಾರತರುವದುವೆ
ನವ್ಯಸುಖದುಯ್ಯಾಲೆ-
ಯಲಿ ತೂಗುವೆನ್ನಿ॥

೨

ಸಾಹಿತ್ಯ ಸುಮನಿಧಿಯು
ಅದುವೆ ನಂದನವನವು
ರಸಜೀವ ಲೋಕದಲಿ
ನಾವ್ ಬಾಳುವೆನ್ನಿ॥
ವಿಷವೇಳೆ ಶಿವಗಾಯ್ತು
ಅಮೃತಪಾನವೆ ಸಾಕು
ರಸಲಹರಿಯೋಲಾಟ-
ದಲಿ ತೇಲುವೆನ್ನಿ॥

೩

ಅಲ್ಲಿಹುದು ಕೃತಿಕುಸುಮ
ನವವಿನೂತನಪ್ರತಿಮ
ಜೀವನದ ಪ್ರತಿಬಿಂಬ
ಮಕರಂದವೆನ್ನಿ ||
ಸಃಮಬಿಂಬ ಮುತ್ತುತಿವೆ
ಝೇಂಕರಿಸಿ ಮುಸುರುತಿವೆ
ಇನಿಜೇನ ಸವಿಯುವಿರೆ
ಸ್ವಾಗತವು ಬನ್ನಿ ||



ಮುಂಬರುವ ಈ ಲೇಖಕನ ಕೃತಿಗಳು—

೧. ಗಂಗಾಸಲಿಲ (ಕಥಾತ್ಮಕ ಕವನಗಳು)

೨. ತಾಯಿಯ ಮಕ್ಕಳು
(ಐತಿಹಾಸಿಕ ಕಾದಂಬರಿ)

೩. ಕನ್ನಡ ಕಹಾನಿಯಾಂ (ಹಿಂದೀ ಭಾಷೆಯಲ್ಲಿ)

೪. ಕನ್ನಡ ಶಿಕ್ಷಕ ( ,, ,, )